ನವಸಾಕ್ಷರ ಪುಸ್ತಕ ಮಾಲೆ ೮೮

# ಅವಂತಿ ಕಥೆಗಳು

ವರುಣ



ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ-೮೮

# ಅವಂತಿ ಕಥೆಗಳು

ವರುಣ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ-೫೮೩ ೨೭೭





**AVANTI KATHEGALU** : By VARUNA. Published by The Director of Prasaranga, Kannada University, Hampi - 583 211, KARNATAKA.
First Impression 1994, Pp. ii + 26, Rs. 8.00

---



ಸಂಯೋಜನಾಧಿಕಾರಿ
ಡಾ|| ಎಚ್. ಎಸ್. ಶ್ರೀಮತಿ
ಪಠ್ಯಪುಸ್ತಕ ರಚನಾ ವಿಭಾಗ

ಪ್ರಕಾಶಕರು
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

ಮುಖಪುಟ ವಿನ್ಯಾಸ
ಕೆ. ಮಕಾಳಿ

ಬೆಲೆ : ರೂ ೮.೦೦



ಮುದ್ರಕರು
ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್
೩/೩, ಮೊದಲನೆ ಮುಖ್ಯರಸ್ತೆ,
ಹೊಸ ತರಗುಪೇಟೆ, ಬೆಂಗಳೂರು-೫೬೦ ೦೦೨.




# ಅವಂತಿ ಕಥೆಗಳು

ಚೀನಾದೇಶದಲ್ಲಿ ಒಬ್ಬ ಮನುಷ್ಯನಿದ್ದನು. ಅವನ ಹೆಸರು ಅವಂತಿ ಎಂದು. ಅವಂತಿಯು ತನ್ನ ಮಾತುಗಳಿಂದ ಎಲ್ಲರನ್ನೂ ಸಂತೋಷಪಡಿಸುತ್ತಿದ್ದನು. ಇಲ್ಲಿ ಬರುವ ಮೊದಲ ನಾಲ್ಕು ಕಥೆಗಳು ಅವಂತಿಯವು. ಈ ಕಥೆಗಳನ್ನು ಓದಿದ ಮೇಲೆ ನಿಮಗೆ ನಗು ಬರಲೇಬೇಕು. ಒಂದು ಪಕ್ಷ ನಿಮಗೆ ನಗು ಬರಲಿಲ್ಲ ಎಂದಿಟ್ಟುಕೊಳ್ಳಿ, ಆಗ ನಿಮಗೆ ಕಥೆ ಅರ್ಥವಾಗಿಲ್ಲ ಎಂದು ತಿಳಿಯಿರಿ, ಮತ್ತೆ ಇನ್ನೊಮ್ಮೆ ಮನಸ್ಸಿಟ್ಟು ಕಥೆಯನ್ನು ಓದಿರಿ.

## ೧. ಹಸುವಿನ ಮಾರಾಟ

**ಮೊದಲು ಈ ಪದಗಳನ್ನು ಓದಿ: ಮಾರಾಟ, ಬಡಕಲು, ಮಾರಾಟಕ್ಕಿರುವ, ಕೊಳ್ಳುವವನು.**

ಅವಂತಿಯ ಹತ್ತಿರ ಒಂದು ಹಸು ಇತ್ತು. ಅದು ತುಂಬಾ ಬಡಕಲು ಹಸು. ಒಂದು ಲೀಟರಿನಷ್ಟು ಹಾಲನ್ನು ಕೂಡಾ ಕೊಡುತ್ತಿರಲಿಲ್ಲ. ಇಂತಹ ಹಸುವನ್ನು ಸಾಕುವುದು ಅಷ್ಟೇನೂ ಲಾಭದಾಯಕವಲ್ಲ. ಆದ್ದರಿಂದ ಈ ಹಸುವನ್ನು ಮಾರಿಬಿಡಬೇಕು ಎಂದು ಆಲೋಚಿಸಿ ನಿಶ್ಚಯಿಸಿದನು. ಅವಂತಿ ಹಸುವನ್ನು ಪೇಟೆಗೆ ತೆಗೆದುಕೊಂಡು ಹೋದನು. ಸರಿಯಾದ ಜಾಗ ಆರಿಸಿಕೊಂಡು, ಹಸುವನ್ನು ನಿಲ್ಲಿಸಿಕೊಂಡು ಅವಂತಿ ಹೀಗೆ ಕೂಗಿ ಕೂಗಿ ಹೇಳಲು ಪ್ರಾರಂಭಿಸಿದ "ಅಣ್ಣತಮ್ಮಂದಿರೆ, ಈ ಹಸು ಮಾರಾಟಕ್ಕಿದೆ. ಇದೊಂದು ಬಡಕಲು ಹಸು. ಒಂದು ಲೀಟರಷ್ಟು ಕೂಡಾ ಹಾಲು ಕರೆಯುವುದಿಲ್ಲ. ಇಂತಹ ಹಸುವನ್ನು ಕೊಳ್ಳುವವರು ಯಾರಾದರೂ ಇದ್ದಾರೆಯೇ? ಇದ್ದರೆ ಮುಂದೆ ಬನ್ನಿ ಅಣ್ಣತಮ್ಮಂದಿರೆ."

ಅವಂತಿಯ ಮಾತುಗಳನ್ನು ಕೇಳಿ ಜನ ನಗುತ್ತಾ ಮುಂದೆ ಹೋಗುತ್ತಿದ್ದರು. ಯಾರೂ ಹಸುವನ್ನು ಕೊಂಡುಕೊಳ್ಳುವುದಕ್ಕೆ ತಯಾರಿದ್ದಂತೆ ಕಾಣಲಿಲ್ಲ.

ಸ್ವಲ್ಪ ದೂರದಲ್ಲಿದ್ದ ಅಂಗಡಿಯಾತ ನಡೆಯುತ್ತಿದ್ದ ತಮಾಷೆಯನ್ನು ನೋಡುತ್ತಿದ್ದನು. ಆತನಿಗೆ ಅವಂತಿಯ ಭೋಳೆ ಸ್ವಭಾವವನ್ನು ನೋಡಿ ಮನಕರಗಿತು. ಅವಂತಿಯ ಬಳಿ ಬಂದು "ನೀನು ಒಪ್ಪಿದರೆ ನಾನು ನಿನ್ನ ಹಸುವನ್ನು ಮಾರಾಟ ಮಾಡಿಸಿಕೊಡಲೇ?" ಎಂದನು.

ಅವಂತಿಗೆ ಸಂತೋಷವಾಯಿತು. "ಸ್ವಾಮಿ ಅಷ್ಟು ಕೆಲಸಮಾಡಿ, ನಿಮಗೆ ಪುಣ್ಯಬಂದೀತು" ಎಂದನು.



ಈ ಚಿತ್ರವನ್ನು ಗಮನವಿಟ್ಟು ನೋಡಿ. ಅವಂತಿ ಹಸುವಿನ ಕುತ್ತಿಗೆಯ ಮೇಲೆ ಒಂದು ಕೋಲನ್ನು ಇಟ್ಟು ಏನನ್ನೋ ಹೇಳುತ್ತಿದ್ದಾನೆ. ಅವನು ಏನು ಹೇಳುತ್ತಿದ್ದಾನೆಂದು ಹೇಳಿ ನೋಡೋಣ.

[ಉತ್ತರಕ್ಕಾಗಿ ಪುಟ ೨೪ ನೋಡಿರಿ]

ಅಂಗಡಿಯಾತ ಹಸುವನ್ನು ಬೇರೊಂದು ಜಾಗಕ್ಕೆ ಕರೆದುಕೊಂಡು ಹೋಗಿ ನಿಲ್ಲಿಸಿಕೊಂಡು ಜೋರಾಗಿ ಹೀಗೆ ಹೇಳತೊಡಗಿದ -"ಅಣ್ಣತಮ್ಮಂದಿರೇ, ಈ ಹಸು ಮಾರಾಟಕ್ಕಿದೆ. ಇದೊಂದು ಘನವಾದ ಹಸು. ಬಹಳ ಸಾಧು, ದಿನಕ್ಕೆ ಆರು ಲೀಟರ್ ಹಾಲು ಕರೆಯುತ್ತದೆ. ಹೇಳಿ ಅಣ್ಣತಮ್ಮಂದಿರೇ, ಯಾರಾದರೂ ಇದನ್ನು ಕೊಂಡುಕೊಳ್ಳುತ್ತೀರಾ"?

ಈ ಮಾತುಗಳನ್ನು ಕೇಳಿದ ಅವಂತಿ ಅಂಗಡಿಯಾತನ ಕೈಯಿಂದ ಹಸುವನ್ನು ಕಸಿದುಕೊಂಡು "ಅರೆ ವ್ಹಾ, ಈ ಹಸು ನಿಜವಾಗಲೂ ಅಷ್ಟು ಒಳ್ಳೆಯ ಹಸುವಾಗಿದ್ದು, ದಿನಕ್ಕೆ ಆರು ಲೀಟರ್ ಹಾಲು ಕರೆಯುವುದಾದರೆ ನಾನು ಯಾಕೆ ಮಾರಲಿ ಇದನ್ನು?" ಎನ್ನುತ್ತಾ ಹೊರಟುಬಿಟ್ಟ.

## ೨. ದೇವರು ಎಲ್ಲರನ್ನೂ ರಕ್ಷಿಸುತ್ತಾನೆ

**ಈ ಪದಗಳನ್ನು ಓದಿರಿ: ಅಂಗಿ, ಬಂದೂಕು, ಗುರಿ, ರಕ್ಷಣೆ, ವಿಧವೆ.**

ಅವಂತಿಯ ಬಳಿ ಒಂದು ಬಿಳಿಯ ಅಂಗಿ ಇತ್ತು. ಆ ಅಂಗಿ ತುಂಬಾ ಕೊಳಕಾಗಿ ಹೋಗಿತ್ತು. ಒಂದು ದಿನ ಆತನ ಹೆಂಡತಿ ಅಂಗಿಯನ್ನು ಒಗೆದು ಶುಭ್ರಗೊಳಿಸಿ ಹೊರಗೆ ಒಣಗಿ ಹಾಕಿದ್ದಳು. ಒಣಗಿದ ಮೇಲೂ ಅಂಗಿ ಹೊರಗಡೆಯೇ ಇತ್ತು. ಆ ರಾತ್ರಿ ಅವಂತಿ ಹೊತ್ತಾಗಿ ಮನೆಗೆ ಬಂದವನು, ಆಕಡೆ ಈಕಡೆ ನೋಡದೆ

ನೇರವಾಗಿ ಮನೆಯೊಳಕ್ಕೆ ಹೋದನು. ಹಾಗಾಗಿ ಅವನು ಒಣಗಲು ಹಾಕಿದ್ದ ಅಂಗಿಯನ್ನು ನೋಡಲಿಲ್ಲ. ನಡುರಾತ್ರಿಯಲ್ಲಿ ಎಚ್ಚರಗೊಂಡ ಅವಂತಿ ಹೊರಗೆ ಬಂದಾಗ ಎದುರಿಗೆ ಯಾವುದೋ ಬಿಳಿಯ ವಸ್ತುವು ಕಾಣಿಸಿದಂತೆ ಅನಿಸಿತು - ಯಾರೋ ಒಬ್ಬ ಮನುಷ್ಯ ಬಿಳಿಯ ಬಟ್ಟೆ ಧರಿಸಿ ಕೈ ಎರಡೂ ಚಾಚಿ ನಿಂತಿದ್ದಾನೆಂದು ಕೊಂಡ ಅವಂತಿ ಅವನು ಕಳ್ಳ ಎಂದು ನಿರ್ಧರಿಸಿಕೊಂಡನು. ತಕ್ಷಣ ಅವಂತಿ ಮೆತ್ತಗೆ ಮನೆಯೊಳಗೆ ಹೋದ. ಹೋದವನೆ ಬಂದೂಕಿನೊಡನೆ ಹಿಂತಿರುಗಿದ. ಗುರಿ ಇಟ್ಟವನೆ ಢಂ! ಢಂ! ಎಂದು ಬಂದೂಕಿನಿಂದ ಗುಂಡನ್ನು ಹಾರಿಸಿಯೇ ಬಿಟ್ಟ.



**ಈ ಚಿತ್ರ ನೋಡಿ. ಅವಂತಿಯು ಅಂಗಿಯ ಮೇಲೆ ಗುಂಡಿನಿಂದ ತೂತು ಮಾಡಿದ್ದಾನೆ. ಆತನ ಹೆಂಡತಿ ಬಂದೂಕಿನ ಸದ್ದು ಕೇಳಿ ಹೊರಗಡೆ ಬಂದಿದ್ದಾಳೆ, ಅವಂತಿ ಅವಳೊಂದಿಗೆ ಏನು ಹೇಳುತ್ತಿದ್ದಾನೆ?**

**[ಉತ್ತರಕ್ಕಾಗಿ ಪುಟ ೨೪ ನೋಡಿರಿ]**

ಬಂದೂಕಿನ ಸದ್ದು ಕೇಳಿದ ಆತನ ಹೆಂಡತಿ ಎಚ್ಚರಗೊಂಡಳು. ಎದ್ದು ಬಿದ್ದು ಹೊರಗೆ ಓಡಿಬಂದವಳು ನೋಡುತ್ತಾಳೇ. ಅವಂತಿ ಬಂದೂಕಿನೊಂದಿಗೆ! ಎದೆ ತಟ್ಟಿಕೊಳ್ಳುತ್ತಾ ಅವಂತಿ "ಕಳ್ಳ, ಕಳ್ಳ ಬಂದಿದ್ದ. ನೀನೇನೂ ಚಿಂತೆ ಮಾಡಬೇಡ, ನಾನು ಅವನ ಕಥೆ ಮುಗಿಸಿಬಿಟ್ಟೆ. ಹೋಗಿ, ಆರಾಮವಾಗಿ ನಿದ್ದೆ ಮಾಡು" ಎಂದನು. ಇಷ್ಟು ಹೇಳಿದವನು ತಾನೂ ಒಳಗೆ ಹೋಗಿ ನಿದ್ದೆ ಮಾಡತೊಡಗಿದನು.

ಬೆಳಗ್ಗೆ ಎದ್ದು ಅವಂತಿ ಹೊರಗಡೆ ಬಂದು ನೋಡುತ್ತಾನೆ. ಅವನದೇ ಅಂಗಿ ತೂತಾಗಿ ನೇತಾಡುತ್ತಿದೆ! ಅವಂತಿ ತನ್ನ ಹೆಂಡತಿಯ ಕಡೆಗೆ ನೋಡುತ್ತಾ "ದೇವರು ಎಲ್ಲರನ್ನೂ ರಕ್ಷಿಸುತ್ತಾನೆ. ಬಂದೂಕಿನಿಂದ ಗುಂಡು ಹೊರಗೆ ಬಂದ ಸಮಯದಲ್ಲಿ ನಾನೇನಾದರೂ ಈ ಬಿಳಿ ಅಂಗಿಯಲ್ಲಿದ್ದಿದ್ದರೆ, ಇಷ್ಟು ಹೊತ್ತಿಗೆ ನೀನು ವಿಧವೆಯಾಗಿರುತ್ತಿದ್ದೆ" ಎಂದನು.

## ೩. ಮೂರು ಉಪದೇಶಗಳು

**ಮೊದಲು ಈ ಪದಗಳನ್ನು ಓದಿರಿ: ಕೊಂಡುಕೊಳ್ಳುವವನು (ಗಿರಾಕಿ), ಪಾತ್ರೆ, ಉಪದೇಶ, ಕೆಲಸಗಾರ.**

ಅವಂತಿಗೆ ಸುಮಾರು ದಿವಸಗಳಿಂದ ಕೆಲಸವೇ ಸಿಕ್ಕಿರಲಿಲ್ಲ. ಹೀಗೇ ಒಂದು ದಿನ "ಕೆಲಸ ಮಾಡುವವರೆಲ್ಲಾ ಒಂದು ಕಡೆ ಹರಟೆ ಹೊಡೆಯುತ್ತಾ ಕುಳಿತಿರುತ್ತಾರಲ್ಲಾ, ಆ ಜಾಗಕ್ಕೆ ಹೋದರೆ ಏನಾದರೂ ಕೆಲಸ ಸಿಗಬಹುದು" ಎಂದು

ಯೋಚಿಸಿದನು. ಸರಿ, ಮರುದಿವಸ ಕೆಲಸಗಾರರೆಲ್ಲಾ ಕುಳಿತಿದ್ದ ಜಾಗಕ್ಕೆ ಹೋಗಿ ತಾನೂ ಕುಳಿತುಬಿಟ್ಟನು, ಸ್ವಲ್ಪ ಹೊತ್ತಾದ ಮೇಲೆ ಒಬ್ಬ ಗಿರಾಕಿ ಬಂದನು. ಅವನ ಬಳಿ ಪಾತ್ರೆಗಳಿಂದ ತುಂಬಿದ ಒಂದು ಬುಟ್ಟಿ ಇತ್ತು. ಅವನು ಕುಳಿತಿದ್ದ ಕೆಲಸಗಾರರ ಹತ್ತಿರ ಬಂದು"ಯಾರು ಈ ಬುಟ್ಟಿಯನ್ನು ನನ್ನ ಮನೆಗೆ ತಲುಪಿಸುತ್ತಾರೋ ಅವರಿಗೆ ನಾನು ಮೂರು ಉಪದೇಶಗಳನ್ನು ಕೊಡುತ್ತೇನೆ" ಎಂದು ಹೇಳಿದ.

ಅಲ್ಲಿದ್ದ ಕೆಲಸಗಾರರಲ್ಲಿ ಯಾರೂ ಬುಟ್ಟಿ ಹೊತ್ತುಕೊಳ್ಳಲು ತಯಾರಿರಲಿಲ್ಲ. ಆದರೆ ಅವಂತಿ ತಯಾರಾಗಿಬಿಟ್ಟ. ಎದ್ದು ನಿಂತುಕೊಂಡ ಅವಂತಿ ಮನಸ್ಸಿನಲ್ಲೇ ಹೀಗೆ ಯೋಚಿಸಿದ "ಹಣ ಸಂಪಾದನೆ ಮಾಡುವ ಸಂದರ್ಭ ಪದೇ ಪದೇ



ಈ ಚಿತ್ರವನ್ನು ಗಮನಿಸಿ. ಅವಂತಿಯು ಪಾತ್ರೆಗಳಿದ್ದ ಬುಟ್ಟಿಯನ್ನು ನೆಲದ ಮೇಲೆ ಕುಕ್ಕಿದನು. ಪಾತ್ರೆಗಳು ಚೂರು ಚೂರಾಗಿವೆ. ಅವಂತಿಯು ಗಿರಾಕಿಗೆ ಏನು ಹೇಳುತ್ತಿದ್ದಾನೆ?

[ಉತ್ತರಕ್ಕಾಗಿ ಪುಟ ೨೫ ನೋಡಿರಿ]

ಬರುತ್ತದೆ. ಆದರೆ ಉಪಯೋಗವಾಗುವ ಉಪದೇಶ ಸಿಗುವುದು ಬಹಳ ಅಪರೂಪ". ಗಿರಾಕಿಯನ್ನು ಕುರಿತು "ನಡೆಯಿರಿ, ನಾನು ನಿಮ್ಮ ಪಾತ್ರೆಗಳ ಬುಟ್ಟಿಯನ್ನು ಹೊತ್ತು ಮನೆಗೆ ತಲುಪಿಸುತ್ತೇನೆ. ಅದಕ್ಕೆ ಬದಲಾಗಿ ನೀವು ಮೂರು ಉಪದೇಶಗಳನ್ನು ಕೊಟ್ಟುಬಿಡಿ" ಎಂದನು.

ಗಿರಾಕಿಗೆ ತುಂಬಾ ಸಂತೋಷವಾಯಿತು. ಅವನು ಅವಂತಿಯ ತಲೆಯ ಮೇಲೆ ಪಾತ್ರೆಗಳ ಬುಟ್ಟಿಯನ್ನು ಎತ್ತಿ ಇಡಲೆಂದು ಕೆಳಗೆ ಬಗ್ಗಿದ. ಆಗ ಅವಂತಿ "ಸ್ವಲ್ಪ ತಡೆಯಿರಿ, ಮೊದಲನೆಯ ಉಪದೇಶವನ್ನು ಮೊದಲೇ ಹೇಳುವುದಕ್ಕೆ ನಿಮಗೇನೂ ತೊಂದರೆ ಇಲ್ಲವಷ್ಟೇ?" ಗಿರಾಕಿಯು ಹೇಳಿದ "ಏನೂ ಇಲ್ಲ, ಕೇಳು ಹಾಗಾದರೆ, ಯಾರಾದರೂ ನಿನ್ನೊಡನೆ ಹೊಟ್ಟೆ ತುಂಬಾ ಊಟ ಮಾಡುವುದಕ್ಕಿಂತಾ, ಹಸಿದ ಹೊಟ್ಟೆಯಲ್ಲಿರುವುದು ಒಳ್ಳೆಯದು ಎಂದು ಹೇಳಿದರೆ ಖಂಡಿತಾ ನಂಬಬೇಡ." ಇದೇನು ಅಂಥಾ ವಿಶೇಷವಾದ ಉಪದೇಶವೇನೂ ಅಲ್ಲ, ಈ ವಿಚಾರ ಎಲ್ಲರಿಗೂ ತಿಳಿದದ್ದೆ! ಎಂದು ಅಂದುಕೊಂಡ ಅವಂತಿ. ಹಾಗಾದರೂ ಬುಟ್ಟಿಯನ್ನು ತಲೆಯ ಮೇಲಿರಿಸಿಕೊಂಡು ಹೊರಟನು. ಅರ್ಧದಾರಿ ಹೋದ ಮೇಲೆ ಅವನು "ಈಗ ಅರ್ಧದಾರಿ ಬಂದಿದ್ದೇನೆ, ಎರಡನೆಯ ಉಪದೇಶವನ್ನು ಹೇಳಿಬಿಡಿ" ಎಂದನು. ಗಿರಾಕಿಯು "ಯಾರಾದರೂ ನಿನಗೆ ವಾಹನಗಳನ್ನು ಹತ್ತಿಕೊಂಡು ಅವುಗಳಲ್ಲಿ ಪ್ರಯಾಣ ಮಾಡುವುದಕ್ಕಿಂತಾ ಕಾಲ್ನಡಿಗೆಯಲ್ಲಿ ಹೋಗುವುದು ಒಳ್ಳೆಯದು ಎಂದು ಹೇಳಿದರೆ ಅವರ ಈ ಮಾತನ್ನು ಎಂದೆಂದಿಗೂ ನಂಬಬೇಡ" ಎಂದು ಹೇಳಿದನು.

"ಇದೂ ಅಂತಹಾ ಅದ್ಭುತವಾದ ಉಪದೇಶವೇನೂ ಅಲ್ಲ. ಈ ವಿಚಾರ ಎಲ್ಲರಿಗೂ ಗೊತ್ತಿರುತ್ತದೆ ಎಂದುಕೊಂಡ ಅವಂತಿ. ಇಷ್ಟಾದರೂ ಅವನು ಏನೂ

ಮರುಮಾತಾಡದೆ ಮುಂದೆ ನಡೆದನು. ಸ್ವಲ್ಪ ಹೊತ್ತಿನಲ್ಲಿ ಗಿರಾಕಿಯ ಮನೆ ಸಮೀಪಿಸಿತು. ಆಗ ಅವಂತಿ "ನೋಡಿ ನಿಮ್ಮ ಮನೆ ಬಂತು. ಈಗ ಮೂರನೆಯ ಉಪದೇಶವನ್ನು ಹೇಳಿ" ಎಂದನು. ಗಿರಾಕಿಯು "ಯಾರಾದರೂ ನಿನ್ನೊಂದಿಗೆ ಬೇರೆ ಕೆಲಸಗಾರರು ನಿನಗಿಂತಾ ಮೂರ್ಖರು ಎಂದು ಹೇಳಿದರೂ ಖಂಡಿತಾ ಅದನ್ನು ನಂಬಬೇಡ" ಎಂದನು. ಅವಂತಿ ಪಾತ್ರೆಗಳಿರುವ ಬುಟ್ಟಿಯನ್ನು ನೆಲದ ಮೇಲೆ ಧಬ್! ಎಂದು ಕುಕ್ಕಿ ಹೇಳಿದನು, ನನ್ನದೂ ಒಂದು ಉಪದೇಶವನ್ನು ಕೇಳಿಸಿಕೊಳ್ಳಿ. ಯಾರಾದರೂ ನಿಮ್ಮೊಂದಿಗೆ "ಈ ಪಾತ್ರೆಗಳು ಚೂರು ಚೂರಾಗಿಲ್ಲ ಎಂದು ಹೇಳಿದರೆ, ಎಂದೆಂದಿಗೂ ನಂಬಬೇಡಿ".

## ೪. ಹದಿನೇಳು ರೂಪಾಯೇ ಕೊಡು

ಒಂದು ರಾತ್ರಿ ಅವಂತಿಗೆ ಒಂದು ಕನಸು ಬಿತ್ತು. ಅವನಿಗೆ ತಾನು ಗೋಧಿ ಮಾರುತ್ತಿದ್ದಂತೆಯೂ, ಒಬ್ಬ ಗಿರಾಕಿಯ ಜೊತೆ ಚೌಕಾಸಿ ಮಾಡುತ್ತಿದ್ದಂತೆಯೂ ಕನಸಿನಲ್ಲಿ ಕಾಣಿಸಿತು.

ಅವಂತಿಯು ಗಿರಾಕಿಯೊಂದಿಗೆ "ಕ್ವಿಂಟಾಲಿಗೆ 120 ರೂಪಾಯಿ" ಎಂದನು.

ಗಿರಾಕಿಯು ಅವಂತಿಯೊಂದಿಗೆ "ಇಲ್ಲ ಬರೀ 115 ಕೊಡುತ್ತೇನೆ ಎಂದನು.

ಅವಂತಿಯು ಮತ್ತೆ "ಖಂಡಿತಾ ಇಲ್ಲ, 118 ರೂ ಕೊಡು ಎಂದನು.

ಗಿರಾಕಿಯು ಅದಕ್ಕೆ "ಸಾಧ್ಯವೇ ಇಲ್ಲ ಕೇವಲ 116 ರೂಪಾಯಿ ಕೊಡುತ್ತೇನೆ" ಎಂದ.

ಅವಂತಿಯ ಕನಸು

ಅಷ್ಟರಲ್ಲಿ ಅವಂತಿಯ ಕನಸು ಹರಿಯಿತು. ಕಣ್ಣು ತೆಗೆದು ನೋಡುತ್ತಾನೆ - ಅಲ್ಲಿ ಗೋಧಿಯೂ ಇಲ್ಲ, ಗಿರಾಕಿಯೂ ಇಲ್ಲ. ಅವಂತಿ ಗಾಬರಿ ಗಾಬರಿಯಿಂದ ಹೇಳಿದ "ಸರಿಯಪ್ಪ ಮಾರಾಯ, ನೂರ ಹದಿನೇಳು ರೂಪಾಯೇ ಕೊಟ್ಟುಬಿಡು".



ಇನ್ನು ಮುಂದೆ ಬರುವ ಐದು ಕಥೆಗಳನ್ನು ನೀವು ಓದಿದಾಗ ನಗು ಬರದೆ ಹೋದರೂ ಅಡ್ಡಿಯಿಲ್ಲ. ಏಕೆಂದರೆ ಈ ಕಥೆಗಳು ಪ್ರಪಂಚದ ಬಗ್ಗೆ ಅರಿವು ಮೂಡಿಸುವ ಕಥೆಗಳು. ಈ ಕಥೆಗಳಿಂದ ಓದುಗರಲ್ಲಿ ತಿಳುವಳಿಕೆ ಮೂಡಲಿ

ಎನ್ನುವುದು ಕಥೆಗಾರನ ಉದ್ದೇಶ. ಯಾವ ರೀತಿಯ ತಿಳುವಳಿಕೆ ಎನ್ನುವುದು ನೀವು ಕಥೆಗಳನ್ನು ಓದಿದ ಮೇಲೆ, ನಿಮಗೇ ತಿಳಿಯುತ್ತದೆ.

## ೫. ಹಾವು ಮತ್ತು ಕಪ್ಪೆ

**ಮೊದಲು ಈ ಪದಗಳನ್ನು ಕಲಿಯಿರಿ: ಧೈರ್ಯ, ವಟಗುಟ್ಟು, ಕ್ರೋಧ, ಹಕ್ಕಿಗಳು, ಮೂರ್ಖ.**

ಒಂದು ಕೆರೆಯ ದಂಡೆಯಲ್ಲಿ ಒಂದು ಹಾವು ವಾಸವಾಗಿತ್ತು. ಒಂದು ದಿನ ಅಲ್ಲಿಗೆ ಕೆಲವು ಜನ ಹಳ್ಳಿಗರು ಬಂದರು. ಅವರುಗಳು ಗುದ್ದಲಿಗಳನ್ನು ಹಿಡಿದು ಕೆರೆಯ ಆಚೀಚೆಯ ನೆಲವನ್ನೆಲ್ಲಾ ಅಗೆದು ಸಮತಟ್ಟಾಗಿ ಮಾಡಲು ಆರಂಭಿಸಿದರು. ಸ್ವಲ್ಪ ಹೊತ್ತಿಗೆ ಎತ್ತಿನಗಾಡಿಯೊಂದು ಅಲ್ಲಿಗೆ ಬಂದು ಇಟ್ಟಿಗೆ, ಕಲ್ಲುಗಳನ್ನು ಹಾಕಿತು, ಇನ್ನೊಂದು ಗಾಡಿ ಬಂತು, ಮತ್ತೊಂದು ಬಂತು. ಇದನ್ನೆಲ್ಲಾ ನೋಡಿದ ಹಾವಿಗೆ ಏನು ನಡೆಯುತ್ತಿದೆ ಎಂದು ಗೊತ್ತಾಯಿತು. "ಇದು ಹೀಗೆಯೇ ಮುಂದುವರೆದು ಇಲ್ಲಿ ಏನಾದರೂ ರಸ್ತೆ ಮಾಡಿಬಿಟ್ಟರೆ ತಾನು ಇಲ್ಲಿ ಜೀವಿಸುವುದು ಕಷ್ಟವಾಗುತ್ತದೆ" ಎಂದುಕೊಂಡು ಮಾರನೆಯ ದಿನ ಯಾವ ಗಾಡಿ ಮೊದಲು ಬರುವುದೋ ಅದರ ಗಾಲಿಗೆ ಗಟ್ಟಿಯಾಗಿ ಸುತ್ತಿಕೊಂಡು ಜೋರಾಗಿ ಅದುಮಿ ಅದನ್ನು ಮುರಿದು ಬಿಡಬೇಕು, ಬಂಡಿಯ ಗಾಲಿ ಮುರಿದುದನ್ನು ನೋಡಿ ಹಳ್ಳಿಗರೆಲ್ಲಾ ಹೆದರಿಕೊಳ್ಳುತ್ತಾರೆ. ನಂತರ ಯಾರೂ ಇಲ್ಲಿಗೆ ಎತ್ತಿನ ಬಂಡಿಯನ್ನು ತರುವ ಧೈರ್ಯ

ಮಾಡುವುದಿಲ್ಲ. ಹೀಗೆಲ್ಲಾ ಮನದಲ್ಲೇ ಲೆಕ್ಕ ಹಾಕಿತು ಹಾವು. ಆದರೆ ಅಷ್ಟು ದೊಡ್ಡ ಕೆಲಸವನ್ನು ಗುಟ್ಟಾಗಿ ಮಾಡಿ ಮುಗಿಸುವುದು ಅದಕ್ಕೆ ಸರಿಕಾಣಲಿಲ್ಲ, ತನ್ನ ಸಾಹಸ ಕಾರ್ಯದ ವಿಚಾರ ದೂರದೂರದವರೆಗೆ ಹರಡಬೇಕೆಂದು ಹಾವು ಆಸೆಪಟ್ಟಿತು.

ಈ ಅಭಿಪ್ರಾಯದೊಂದಿಗೆ ಅದು ಕಪ್ಪೆಯ ಬಳಿಗೆ ಹೋಯಿತು. ಕಪ್ಪೆಯೊಡನೆ "ನಾನೊಂದು ಭಯಂಕರವಾದ ಹೋರಾಟ ನಡೆಸಲು ಹೊರಟಿದ್ದೇನೆ. ಸುತ್ತಮುತ್ತಲಿನ ಹಳ್ಳಿಯ ಜನರು ಇಲ್ಲಿ ಒಂದು ರಸ್ತೆ ಮಾಡುವ ಹಂಚಿಕೆ ಹೂಡಿರುವುದು ನಿನಗೆ ಗೊತ್ತೇ ಇದೆ. ನಾನು ಆ ಮೂರ್ಖರಿಗೆ ಇಲ್ಲಿ ರಸ್ತೆ ಮಾಡಲು ಸಾಧ್ಯವಿಲ್ಲ ಎಂದು ತೋರಿಸುತ್ತೇನೆ. ಈ ದಿನ ಕಲ್ಲು ತುಂಬಿದ ಗಾಡಿ ಬಂದಾಗ ನಾನು ಹೋಗಿ ಅದರ ಗಾಲಿಗೆ ಬಲವಾಗಿ ಸುತ್ತಿಕೊಂಡು ಒತ್ತಿ ಅದನ್ನು ಚೂರು ಚೂರು ಮಾಡಿಬಿಡಬೇಕು ಎಂದು ನಿಶ್ಚಯಮಾಡಿದ್ದೇನೆ. ಆದರೆ ನೋಡು, ಇಷ್ಟೊಂದು ದೊಡ್ಡ ಹೋರಾಟ ಯಾರಿಗೂ ಗೊತ್ತಿಲ್ಲದಂತೆ ಜರುಗಿ ಹೋಗಬಾರದು. ಆದ್ದರಿಂದ ನೀನು ಈ ಕ್ಷಣವೇ ನಿನ್ನ ಡೋಲನ್ನು ತೆಗೆದುಕೊಂಡು ನನ್ನೊಂದಿಗೆ ನಡೆ. ನಾನು ಈ ಕಾರ್ಯದಲ್ಲಿ ಮೊದಲು ಹೆಜ್ಜೆ ಇಡುತ್ತಿದ್ದಂತೆ, ನೀನು ಚೆನ್ನಾಗಿ, ಜೋರು ಜೋರಾಗಿ ಡೋಲು ಬಡಿ. ದೊಡ್ಡದನಿಯಲ್ಲಿ ವಟಗುಟ್ಟು, ನಿನ್ನ ಡೋಲು ಬಡಿತದ ಸದ್ದಿನಿಂದ ಮತ್ತು ವಟಗುಟ್ಟುವಿಕೆಯಿಂದ ಈ ಹೋರಾಟದ ಸುದ್ದಿ ದೂರದೂರದವರೆಗೆ ಹರಡುತ್ತದೆ. ಈ ರೀತಿ ಜಗತ್ತು ನನ್ನ ಶೌರ್ಯ ಸಾಹಸಗಳನ್ನು ತಿಳಿದುಕೊಂಡು ನನ್ನನ್ನು ಶ್ರೇಷ್ಠನೆನ್ನುತ್ತದೆ" ಎಂದು ವಿವರವಾಗಿ ಹೇಳಿ ಹೊರಟಿತು. ಅದೇ ಹೊತ್ತಿಗೆ ಹಾವಿಗೆ ಗಾಡಿಯ ಸದ್ದು ಕೇಳಿಸಿತು. ಅದು ಕ್ರೋಧದಿಂದ ಹೂಂಕಾರ ಮಾಡುತ್ತಾ ಗಾಡಿಯ ಕಡೆಗೆ ಮುಂದುವರೆಯಿತು. ಗಾಡಿ ಹತ್ತಿರ ಬಂದ ತಕ್ಷಣ ಹಾವು ಅದರ





ಈ ಚಿತ್ರವನ್ನು ನೋಡಿ. ಎತ್ತಿನ ಬಂಡಿಯ ಗಾಲಿಯ ಕೆಳಗೆ ಸಿಕ್ಕಿದ ಹಾವು ಎರಡು ತುಂಡಾಗಿ ಹೋಗಿದೆ. ಕೆಳಗೆ ಕಪ್ಪೆ ಕುಳಿತಿದೆ. ಕಪ್ಪೆ ಏನು ಮಾಡುತ್ತಿದೆ?

[ಉತ್ತರವನ್ನು ೨೫ನೇ ಪುಟದಲ್ಲಿ ನೋಡಿರಿ]

ಗಾಲಿಗೆ ಸುತ್ತಿಕೊಳ್ಳಲು ಮುನ್ನುಗ್ಗಿತು. ಗಾಲಿ ತಿರುಗಿತು, ತಕ್ಷಣವೇ ಹಾವು ಎರಡು ತುಂಡಾಗಿ ಹೋಯಿತು.

ಆದರೆ ನಡೆದ ವಿಚಾರ ಕಪ್ಪೆಗೆ ಗೊತ್ತಾಗಲೇ ಇಲ್ಲ. ಅದು ಜೋರಾಗಿ ಡೋಲು ಬಡಿಯತ್ತಾ ಒಂದೇ ಸಮನೆ ವಟವಟ್ಟುತ್ತಿತ್ತು. ಸ್ವಲ್ಪ ಹೊತ್ತಿನ ನಂತರ ಹಕ್ಕಿಗಳ ಗುಂಪೊಂದು ಈ ಘಟನೆ ನಡೆದ ಸ್ಥಳಕ್ಕೆ ಬಂದಿತು. ಸತ್ತು ಬಿದ್ದ ಹಾವನ್ನು ಗಬಗಬನೆ ತಿಂದು ಮುಗಿಸಿದವು. ಅಲ್ಲಿದ್ದ ಕಪ್ಪೆಗೆ ಆಗಲೂ ವಿಚಾರ ತಿಳಿಯಲಿಲ್ಲ. ಅದು ತನ್ನ ಪಾಡಿಗೆ ತಾನು ಡೋಲು ಬಡಿಯುತ್ತಾ, ಜೋರಾಗಿ ವಟಗುಟ್ಟುತ್ತಾ ಇತ್ತು. ಇದನ್ನು ನೋಡಿದ ಹಕ್ಕಿಗಳು ತಮ್ಮತಮ್ಮಲ್ಲೇ "ಈ ಮೂರ್ಖ ಕಪ್ಪೆ ತುಂಬಾ ಹೊತ್ತಿನಿಂದ ಗಲಾಟೆಮಾಡುತ್ತಿದೆ. ಬನ್ನಿ ಇದನ್ನು ಕಬಳಿಸಿ ಹೋಗೋಣ" ಎಂದು ಮಾತಾಡಿಕೊಂಡು ಕಪ್ಪೆಯ ಮೇಲೆರಗಿ ಅದನ್ನು ಕೊಂದು ತಿಂದು ಮುಗಿಸಿದವು.

ಈ ಕಥೆಯಿಂದ ನಮಗೆ ಏನು ತಿಳಿಯುತ್ತದೆ?

## ೬. ಎರಡು ಕೋತಿಗಳು

ಈ ಪದಗಳನ್ನು ಕಲಿಯಿರಿ: ಮನುಷ್ಯರು, ಕೋತಿಗಳು, ಹಿಡಿತ, ಕ್ರೋಧ, ಘಟನೆಗಳು.

ಒಂದು ದಿನ ಎರಡು ಕೋತಿಗಳು ಮಾವಿನ ತೋಪಿಗೆ ನುಗ್ಗಿದವು. ಒಂದು

ಕೋತಿ ಹೇಳಿತು, "ನಾವೆಂದರೆ ಮನುಷ್ಯರಿಗೆ ಕೆಟ್ಟಭಾವನೆ ಇದೆ. ಎಲ್ಲರೂ ನಮ್ಮನ್ನೂ ಕಳ್ಳರು ಎನ್ನುತ್ತಾರೆ. ಇದರಿಂದ ಕೋತಿ ಜಾತಿಗೇ ದೊಡ್ಡ ಕಳಂಕ. ಈ ಕಳಂಕವನ್ನು ನಾವು ಅಳಿಸಿಹಾಕಬೇಕು. ಆದ್ದರಿಂದ ಇನ್ನುಮೇಲೆ ನಾವು ನಮ್ಮ ಮೇಲೆ ಹಿಡಿತವಿಟ್ಟುಕೊಂಡಿರಬೇಕು. ಆದ್ದರಿಂದ ಬಾ, ನಾವು ಒಬ್ಬರನ್ನೊಬ್ಬರು ನೋಡುತ್ತಾ ಇರೋಣ. ನೀನು ನನ್ನ ಮೇಲೆ ನಿಗಾ ಇಡು, ನಾನು ನಿನ್ನ ಮೇಲೆ ಗಮನವಿಟ್ಟಿರುತ್ತೇನೆ. ಈ ರೀತಿ ಇಬ್ಬರಲ್ಲಿ ಯಾರೊಬ್ಬರು ಕಳ್ಳತನ ಮಾಡದಿರುವ ಹಾಗೆ ನೋಡಿಕೊಂಡ ಹಾಗೆ ಆಗುತ್ತೆ, ಏನಂತೀಯ?" ಇನ್ನೊಂದು ಕೋತಿ ಈ ಸಲಹೆಗೆ ಒಪ್ಪಿಗೆ ನೀಡಿತು.

ಎರಡು ಕೋತಿಗಳೂ ಮಾವಿನಮರದ ಕೊಂಬೆಯೊಂದರ ಮೇಲೆ ಎದುರು-ಬದುರು ಕುಳಿತುಕೊಂಡವು. ಸುಮಾರು ಹೊತ್ತಿನವರೆಗೆ ಪರಸ್ಪರ ನೋಡುತ್ತಾ ಕುಳಿತಿದ್ದವು. ಅಷ್ಟರಲ್ಲಿ ಒಂದು ಕೋತಿಯ ಬೆನ್ನನ್ನು ಇರುವೆಗಳು ಕಚ್ಚಿದವು. ಆಗ ಆ ಕೋತಿಯು ಬೆನ್ನನ್ನು ಕರೆದುಕೊಳ್ಳುವ ಸಲುವಾಗಿ ಹಿಂದಕ್ಕೆ ತಿರುಗಿ ತಕ್ಷಣ ಎರಡನೆಯ ಕೋತಿ ಸಮಯ ನೋಡಿ ತಟ್ಟನೆ ಒಂದು ಮಾವಿನ ಹಣ್ಣನ್ನು ಕಿತ್ತು ಬಾಯಲ್ಲಿಟ್ಟುಕೊಂಡಿತು. ನಂತರ ಮಾಮೂಲಿನಂತೆ, ಏನು ನಡೆದೇ ಇಲ್ಲವೇನೋ ಎನ್ನುವ ಹಾಗೆ ಕುಳಿತುಕೊಂಡಿತು.

ಸ್ವಲ್ಪವೇ ಹೊತ್ತಿನಲ್ಲಿ ಎರಡನೆಯ ಕೋತಿಯ ಬೆನ್ನನ್ನು ಇರುವೆಗಳು ಕಚ್ಚಿದವು. ಅದು ಬೆನ್ನನ್ನು ಕೆರೆದುಕೊಳ್ಳಲೆಂದು ತಿರುಗಿದಾಗ, ಮೊದಲನೆಯ ಕೋತಿ ಇದೇ ಸುಸಮಯವೆಂದು ಮಾಮರದಿಂದ ಒಂದು ಹಣ್ಣುಕಿತ್ತು ಬಾಯಲ್ಲಿಟ್ಟುಕೊಂಡಿತು. ಅದೂ ಕೂಡಾ, ಏನೂ ಆಗಿಯೇ ಇಲ್ಲವೇನೋ ಎನ್ನುವಂತೆ ಕುಳಿತಿತು.

ಈ ರೀತಿ ಎರಡೂ ಕೋತಿಗಳು ತಮ್ಮ ತಮ್ಮ ಬಾಯಿಯಲ್ಲಿ ಮಾವಿನ ಹಣ್ಣನ್ನು ತುರುಕಿಕೊಂಡು, ಒಬ್ಬರ ಮೇಲೊಬ್ಬರ ನಿಗಾ ಇಟ್ಟಿರುವ ಹಾಗೆ ನಟಿಸುತ್ತಿದ್ದವು. ಕಣ್ಣು ಪಿಳುಕಿಸದೆ ಪರಸ್ಪರರನ್ನು ನೋಡುತ್ತಿದ್ದವು. ಈ ನಾಟಕ ತುಂಬಾ ಹೊತ್ತು ಮುಂದುವರಿಯಲಿಲ್ಲ. ಎರಡೂ ಕೋತಿಗಳಿಗೆ ಏನು ನಡೆದಿದೆ ಎಂಬುದು ಗೊತ್ತಾಗಿ ಹೋಯಿತು.



ಈ ಚಿತ್ರವನ್ನು ನೋಡಿ. ಎರಡೂ ಕೋತಿಗಳು ಏನು ಮಾಡುತ್ತಿವೆ?

[ಉತ್ತರವನ್ನು ೨೫ನೇ ಪುಟದಲ್ಲಿ ನೋಡಿರಿ]

ಮೊದಲ ಕೋತಿಗೆ ಎರಡನೆಯ ಕೋತಿಯ ಮೇಲೆ ಕ್ರೋಧ ಉಕ್ಕಿಬಂತು. ಅದು ಎರಡನೆ ಕೋತಿಯ ಕಡೆಗೆ ಸಂಜ್ಞೆ ಮಾಡುತ್ತಾ, ಮೂಗಿನಿಂದಲೇ ಮಾತಾಡಿತು "ನೀನು.................. ನೀನು............. ನೀನು..........." ಎಂದಿತು.

ಎರಡನೆಯ ಕೋತಿಗೂ ಮೊದಲನೆಯ ಕೋತಿಗೂ ಮೊದಲನೆಯ ಕೋತಿಯ ಮೇಲೆ ತುಂಬಾ ಕೋಪ ಬಂತು. ಅದೂ ಕೂಡಾ ತನ್ನ ಜೊತೆಗಾರನ ಕಡೆಗೆ ಬೆರಳು ತೋರಿಸಿ, ಮೂಗಿನಲ್ಲಿ ಮಾತಾಡುತ್ತ "ನೀನು.................. ನೀನು............ ನೀನು..........." ಎಂದಿತು.

ಇಂತಹ ಘಟನೆಗಳು ಆಗೊಮ್ಮೆ ಈಗೊಮ್ಮೆ ನಡೆಯಬಹುದು. ನಾವು ನಮ್ಮಲ್ಲಿರುವ ತಪ್ಪುಗಳನ್ನು ಕಂಡುಕೊಳ್ಳದೆ, ಬೇರೆಯವರ ದೋಷಗಳನ್ನು ಕಂಡುಹಿಡಿದು ಅದಕ್ಕಾಗಿ ಅವರನ್ನೂ ದೂಷಿಸುತ್ತೇವೆ.

## ೭. ಸಿಂಹದ ಮರಿ

**ಈ ಪದಗಳನ್ನು ಮೊದಲು ಓದಿರಿ: ಪರಿವಾರ, ಬಲಶಾಲಿ**

ಒಂದು ಕಾಡು ಇತ್ತು. ಅದರಲ್ಲಿ ತುಂಬಾ ಪ್ರಾಣಿಗಳು ವಾಸ ಮಾಡುತ್ತಿದ್ದವು. ಒಂದು ದಿನ ಈ ಪ್ರಾಣಿಗಳ ನಡುವೆ ಒಂದು ಚರ್ಚೆ ನಡೆಯಿತು. ಚರ್ಚೆಯ ವಿಷಯ ಏನೆಂದರೆ ಹೆಚ್ಚು ಮಕ್ಕಳನ್ನು ಪಡೆಯುವುದು ಒಳ್ಳೆಯದು. ಕಡಿಮೆ ಮಕ್ಕಳನ್ನು ಪಡೆಯುವುದು ಒಳ್ಳೆಯದೆ? ಎಂಬುದು. ಕಡಿಮೆ ಮರಿಗಳನ್ನು ಹೆತ್ತಿರುವ ಪ್ರಾಣಿಗಳು "ನಮಗೆ ಕಡಿಮೆ ಮರಿಗಳಿವೆ ನಿಜ. ಆದರೆ ಅವೆಲ್ಲಾ ಬಲಶಾಲಿಗಳಾಗಿಲ್ಲವೇ?" ಎಂದು ವಾದಿಸಿದರೆ ಹೆಚ್ಚು ಮರಿಗಳನ್ನು ಹೊಂದಿರುವ ಪ್ರಾಣಿಗಳು"ನೋಡಿ, ನೋಡಿ, ನಮ್ಮ ಪರಿವಾರ ಎಷ್ಟೊಂದು ದೊಡ್ಡದು" ಎನ್ನುತ್ತಾ ಹೆಮ್ಮೆಪಟ್ಟವು. ತುಂಬಾ ಹೊತ್ತಿನ ವರೆಗೆ ಈ ಚರ್ಚೆ ಮುಗಿಯಲೇ ಇಲ್ಲ. ಎರಡು ಗುಂಪಿನಲ್ಲಿ ಯಾರು ಸೋಲೊಪ್ಪಿಕೊಳ್ಳಲಿಲ್ಲ. ಕೊನೆಗೆ, ಕಾಡಿನ ಮಹಾರಾಣಿಯಾದ



ಮೇಲಿನ ಚಿತ್ರದಲ್ಲಿ ಸಿಂಹಿಣಿ ಮತ್ತು ಆದರ ಮರಿ ಇದೆ. ಕೆಳಗೆ ಹೆಣ್ಣು ಹಂದಿ ಇದೆ. ಸಿಂಹಿಣಿ, ಹೆಣ್ಣು ಹಂದಿಗೆ ಏನು ಹೇಳಿತು ಎಂಬುದನ್ನು ಹೇಳಿ.

[ಉತ್ತರವನ್ನು ೨೬ ಪುಟದಲ್ಲಿ ನೋಡಿರಿ]

ಸಿಂಹಿಣಿಯ ಬಳಿಗೆ ಹೋಗಿ ಕೇಳುವುದೆಂದು ನಿಶ್ಚಯವಾಯಿತು.

ಸರಿ, ಎಲ್ಲವೂ ಸಿಂಹಿಣಿಯ ಬಳಿಗೆ ಹೋದವು. ಅವುಗಳ ನಡುವೆ ಇದ್ದ ಹೆಣ್ಣುಹಂದಿಯೊಂದು, ಎಲ್ಲಾ ಪ್ರಾಣಿಗಳ ಪರವಾಗಿ ಮುಂದೆ ಬಂದು "ಮಹಾರಾಣಿ ಸಿಂಹಿಣಿ, ನೀನು ಎಷ್ಟು ಮರಿಗಳಿಗೆ ಜನ್ಮಕೊಡುತ್ತೀಯೆ? ಎಂದು ಕೇಳಿತು. ಸಿಂಹಿಣಿಯು ಬಾಣದಂತಹಾ ಚೂಪಾದ ಉತ್ತರ ಕೊಟ್ಟಿತು.

"ಒಂದೇ ಒಂದು. ಆದರೆ ಆ ಒಂದು ಮರಿ ಸಿಂಹವಾಗಿರುತ್ತದೆ."

ಹೆಚ್ಚು ಮಕ್ಕಳನ್ನು ಪಡೆಯಬೇಕೆಂಬ ಮಾತಿನಲ್ಲಿ ಹುರುಳಿಲ್ಲ. ಹೆಚ್ಚು ಮಕ್ಕಳು ಹುಟ್ಟಿ, ಅವರು ದುರ್ಬಲರಾಗಿ, ಓದುಬರಹ ಕಲಿಯದವರಾಗಿ, ಉದ್ಯೋಗ ಇಲ್ಲದವರಾಗಿ ಬವಣೆ ಪಡುವುದರಲ್ಲಿ ಏನು ಸುಖವೂ ಇಲ್ಲ. ಕಡಿಮೆ ಮಕ್ಕಳು ಹುಟ್ಟಿ, ಓದು-ಬರಹ ಕಲಿತು, ಬಲಶಾಲಿಗಳಾಗಿ, ಒಳ್ಳೆಯ ಮನುಷ್ಯರಾಗಿ ಬಾಳುವುದೇ ಲೇಸು.

## ೮. ಅಸ್ವಸ್ಥ ಸಿಂಹ

**ಮೊದಲು ಈ ಪದಗಳನ್ನು ಓದಿರಿ: ವಿಶ್ವಾಸ (ನಂಬಿಕೆ), ಉಯಿಲು, ದರ್ಶನ, ನಸುನಗು.**

ಸಿಂಹವೊಂದು ಬಹಳ ಮುದಿಯಾಗಿತ್ತು. ಅದಕ್ಕೆ ಬೇಟೆಯಾಡಲು ಕೂಡಾ ಶಕ್ತಿ ಇರಲಿಲ್ಲ. ತನಗೆ ಬಹಳ ಹುಷಾರಿಲ್ಲದಂತೆ ಆಗಿದೆ ಎಂಬ ಸುದ್ದಿಯನ್ನು ಕಾಡಿನ ತುಂಬಾ ಹಬ್ಬಿಸಿತು. ತನಗೆ ಹುಷಾರಿಲ್ಲದ್ದರಿಂದ ಎಲ್ಲಾ ಪ್ರಾಣಿಗಳನ್ನೂ ಕೊನೆಯ

ಬಾರಿಗೆ ನೋಡಲು ತನಗೆ ಇಚ್ಛೆ ಇದೆಯೆಂದು, ತಾನು ಎಲ್ಲಾ ಪ್ರಾಣಿಗಳನ್ನು ಒಂದೊಂದಾಗಿ ಸರದಿಯ ಪ್ರಕಾರ ಭೇಟಿ ಮಾಡುವುದಾಗಿಯೂ, ಮತ್ತು ತನ್ನ ಆಸ್ತಿಪಾಸ್ತಿಯ ವಿಲೇವಾರಿಯ ವಿಚಾರವನ್ನು ಎಲ್ಲಾ ಪ್ರಾಣಿಗಳೊಂದಿಗೆ ಮಾತನಾಡಲು ಇಚ್ಛಿಸುವುದೆಂದೂ ಸುದ್ದಿ ಹಬ್ಬಿಸಿತು.

ಹೆಚ್ಚುಕಡಿಮೆ ಎಲ್ಲ ಪ್ರಾಣಿಗಳೂ ಈ ವದಂತಿಯನ್ನು ನಂಬಿದವು. ಅವು ಒಂದೊಂದಾಗಿ ಸಿಂಹದ ಗುಹೆಯೊಳಗೆ ಹೋಗಲು ಆರಂಭಿಸಿದವು.

ಒಂದು ದಿನ ಸಿಂಹ ತನ್ನ ಗುಹೆಯ ಹೊರಗಡೆ ಕುಳಿತುಕೊಂಡಿತ್ತು. ಅದೇ



**ಸಿಂಹ ಸಂತೋಷದಿಂದ ಇರುವಂತೆ ಕಾಣುತ್ತಿದೆಯೋ ಅಥವಾ ಕೋಪದಲ್ಲಿದೆ ಎನಿಸುತ್ತಿದೆಯೋ ಹೇಳಿ. ಕೋಪದಲ್ಲಿ ಇದ್ದಂತೆ ಕಾಣುತ್ತಿದ್ದರೆ, ಕಾರಣ ಹೇಳಿ.**

[ಉತ್ತರವನ್ನು ೨೬ ಪುಟದಲ್ಲಿ ನೋಡಿರಿ]

ಸಮಯಕ್ಕೆ ಒಂದು ನರಿ ಅದನ್ನು ಭೇಟಿ ಮಾಡಲು ಅಲ್ಲಿಗೆ ಬಂತು. ಅದು ಗುಹೆಯಿಂದ ದೂರವೇ ಕುಳಿತುಕೊಂಡಿತು. ಸಿಂಹವು ಗರ್ಜಿಸುತ್ತಾ "ಏನು ಸಮಾಚಾರ ನರಿಯಣ್ಣ? ಹತ್ತಿರ ಬರುತ್ತಿಲ್ಲ ಯಾಕೆ? ಏನು ನೀನು, ಹೀಗೇಯೇನು ಕಾಡಿನ ರಾಜನ ದರ್ಶನ ಮಾಡುವುದು?" ಎಂದಿತು.

ನರಿಯು ನಸುನಗುತ್ತಾ ಉತ್ತರಿಸಿತು "ಮಹಾರಾಜ! ನಾನು, ನಿಮ್ಮ ಹತ್ತಿರ ಬಂದಿರುವ ಪ್ರಾಣಿಗಳ ಹೆಜ್ಜೆಗುರುತನ್ನು ನೋಡುತ್ತಾ ಅದೇ ಹಾದಿಯಲ್ಲಿ ಬಂದಿದ್ದೇನೆ. ಬಂದ ಮೇಲೆ ಒಂದು ವಿಚಾರ ತಿಳಿಯಿತು. ಅದೇನೆಂದರೆ, ನಿಮ್ಮ ಬಳಿ ಬಂದ ಯಾವುದೇ ಪ್ರಾಣಿ ಹಿಂದಿರುಗಿ ಹೋಗಿಲ್ಲ. ಆದ್ದರಿಂದ ಈಗ ಗುಹೆಯಲ್ಲಿ ಸುಮಾರು ಪ್ರಾಣಿಗಳಿಂದ, ನೂಕು ನುಗ್ಗಲು ಇರುತ್ತದೆ ಅನಿಸುತ್ತದೆ. ಒಳಗಿರುವ ಕೆಲವು ಪ್ರಾಣಿಗಳಾದರೂ ಹೊರಗೆ ಬರುವವರೆಗೆ, ಒಳಗೆ ಸ್ಥಳ ಇರುವುದಿಲ್ಲ. ಆದ್ದರಿಂದ ನಾನು ಇಲ್ಲಿರುವುದೇ ಚೆನ್ನ".

ನಾವು ಅಲ್ಲಿ-ಇಲ್ಲಿ, ಅವರಿಂದ-ಇವರಿಂದ ಕೇಳಿಸಿಕೊಂಡ ಮಾತುಗಳನ್ನು ನಂಬಬಾರದು. ಸುತ್ತಲೂ ಆಗುತ್ತಿರುವುದರ ಕಡೆಗೆ ಎಚ್ಚರ ವಹಿಸಬೇಕು. ತಿಳುವಳಿಕೆಯಿಂದ ಪರಿಸ್ಥಿತಿಯನ್ನು ಎದುರಿಸಬೇಕು.

## ೯. ಚಂದದ ಹಕ್ಕಿ, ಸುಂದರ ಹೂವು

**ಮೊದಲು ಈ ಪದಗಳನ್ನು ಓದಿಕೊಳ್ಳಿರಿ: ಪುಟ್ಟ, ಹಾಗೆಯೇ, ಮುಂಜಾನೆ, ಪ್ರತಿಧ್ವನಿ.**

ಒಂದು ಗೋಡೆಯ ಮೇಲೆ ಒಂದು ಗಿಡ ಹುಟ್ಟಿತ್ತು. ಅದರಲ್ಲಿ ಒಂದು ಸುಂದರವಾದ ಹೂ ಕೂಡಾ ಬೆಳೆದಿತ್ತು. ಒಂದು ಮುದ್ದಾದ, ಪುಟ್ಟ ಹಕ್ಕಿ ದಿನವೂ ಒಂದು ಹೂವಿನ ಮೇಲೆ ಕುಳಿತುಕೊಳ್ಳುತ್ತಿತ್ತು. ಮುಂಜಾನೆ ಹೂವು ನಿದ್ದೆಯಿಂದ ಏಳುತ್ತಿದ್ದ ಹಾಗೆಯೇ, ಹಕ್ಕಿ ಓಡೋಡಿ ಬಂದು ಹೂವಿನ ಮೇಲೆ ಕೂರುತ್ತಿತ್ತು. ಆಮೇಲೆ ಎರಡೂ ಸೇರಿ ತಮ್ಮ ತಮ್ಮದೇ ಭಾಷೆಯಲ್ಲಿ ಹಾಡು ಹೇಳಲು ಆರಂಭಿಸುತ್ತಿದ್ದವು. ಪುಟ್ಟ ಹಕ್ಕಿ ಜಿಗಿಯುತ್ತಾ ಹೀಗೆ ಹಾಡುತ್ತಿತ್ತು;

ನಾನೊಂದು ಮುದ್ದಾದ ಪುಟ್ಟ ಹಕ್ಕಿ,

ನನ್ನ ರೆಕ್ಕೆ ಚೆಂದ, ಪುಕ್ಕ ಚೆಂದ, ನಾನೂ ಚೆಂದ//

ಹೂವು ತಲೆತೂಗಿ ಆಲಾಪನೆ ಮಾಡುತ್ತಾಃ

ನಾನೊಂದು ಮುದ್ದಾದ ಪುಟ್ಟ ಹೂವು

ನನ್ನ ಬಣ್ಣಕ್ಕೆ, ವಾಸನೆಗೆ ಮರುಳು ನೀವು.

ಪುಟ್ಟ ಹಕ್ಕಿ ಚಿಲಿಪಿಲಿಗುಟ್ಟುತ್ತಾ ಹಾರುತ್ತಿತ್ತು. ಮತ್ತೆ ಆಲಾಪನೆ ಮಾಡತೊಡಗಿ ಅದೇ ಹಾಡನ್ನು ಹಾಡುತ್ತಾ ಸಂತೋಷಪಡುತ್ತಿತ್ತು.

ಹೂವು ಬಾಗುತ್ತಾ, ಬಳುಕುತ್ತಾ, ತಲೆತೂಗಿ ತಾಳ ಹಾಕುತ್ತಾ ತನ್ನ ಹಾಡನ್ನು ಮತ್ತೆ ಗುನಗುನಿಸುತ್ತಿತ್ತು.

ಆಮೇಲೆ ಇಬ್ಬರೂ ಸೇರಿ ತಮ್ಮ ದನಿಗಳನ್ನು ಸೇರಿಸಿ ಒಂದೇ ಸ್ವರದಲ್ಲಿ



ಈ ಜನರು ಹೂವು ಮತ್ತು ಹಕ್ಕಿಯನ್ನು ನೋಡಿ ಓಡಿ ಹೋಗುತ್ತಿದ್ದಾರೋ ಅಥವಾ ಹಕ್ಕಿಯನ್ನು ಕರೆಯುತ್ತಿದ್ದಾರೆಯೋ? ಓಡುತ್ತಿದ್ದಾರೆ ಎನಿಸಿದರೆ ಏಕೆ ಓಡುತ್ತಿದ್ದಾರೆ ಹೇಳಿ.

[ಉತ್ತರವನ್ನು ೨೬ ಪುಟದಲ್ಲಿ ನೋಡಿರಿ]

ಹಾಡಲು ಪ್ರಾರಂಭಿಸುತ್ತಿದ್ದರು. ತಮ್ಮ ಚೆಂದದ ಬಗ್ಗೆ ಹಾಡುತ್ತಿರುವ ಈ ಹಾಡಿನಿಂದ ಕಾಡಿಗೆ ಕಾಡೇ ಪ್ರತಿಧ್ವನಿಸುತ್ತಿತ್ತು.

ಎರಡೂ ನಿಜವಾಗಿಯೂ ಸುಂದರವಾಗಿದ್ದವು. ಆದರೆ ಅವೆರಡೂ ತಮ್ಮ ಅಂದ-ಚಂದಗಳ ಬಗ್ಗೆ ಪದೇ ಪದೇ ಮಾತನಾಡುವುದನ್ನು ಕೇಳಿ ಕೇಳಿ ಜನರು ಬೇಸತ್ತರು, ಜಿಗುಪ್ಸೆಗೊಂಡರು, ಅಲ್ಲಿಂದ ಒಡಲು ಪ್ರಾರಂಭಿಸಿದರು.

ಕೆಲವು ಬಾರಿ, ಕೆಲವು ಒಳ್ಳೆಯ ಜನರಿಗೂ ಈ ಗತಿ ಒದಗುತ್ತದೆ. ಅವರು ನಿಜವಾಗಿ ಒಳ್ಳೆಯವರಾಗಿರುತ್ತಾರೆ. ಆದರೆ ಹಗಲು-ರಾತ್ರಿ ತಮ್ಮ ಒಳ್ಳೆಯತನದ ಬಗ್ಗೆ ಬಡಬಡಿಸುತ್ತಿರುತ್ತಾರೆ. ಅದರ ಪರಿಣಾಮ, ಕೇಳುವವರಿಗೆ ಬೇಸರ, ಜಿಗುಪ್ಸೆ ಉಂಟಾಗುತ್ತದೆ, ಕ್ರಮೇಣ ಅವರ ಮಾತನ್ನು ಕೇಳಲು ಯಾರೂ ಇಚ್ಛಿರುವುದಿಲ್ಲ.

## ಪ್ರಶ್ನೆಗಳಿಗೆ ಉತ್ತರಗಳು.

ಚಿತ್ರ ೧.

ಅವಂತಿ ಪೇಟೆಯಲ್ಲಿ ಜನರನ್ನು ಕುರಿತು "ಅಣ್ಣತಮ್ಮಂದಿರೆ, ಈ ಹಸು ಮಾರಾಟಕ್ಕಿದೆ. ಇದೊಂದು ಬಡಕಲು ಹಸು. ಒಂದು ಲೀಟರಷ್ಟು ಹಾಲನ್ನು ಕೂಡಾ ಕೊಡುವುದಿಲ್ಲ. ಇದನ್ನು ಕೊಂಡುಕೊಳ್ಳುವವರು ಯಾರಾದರೂ ಇದ್ದೀರಾ, ಇದ್ದರೆ ಮುಂದೆ ಬನ್ನಿ" ಎನ್ನುತ್ತಿದ್ದಾನೆ.

ಚಿತ್ರ ೨.

ಅವಂತಿ ತನ್ನ ಹೆಂಡತಿಗೆ ಹೇಳುತ್ತಿದ್ದಾನೆ "ಕಳ್ಳ ಬಂದಿದ್ದ ಕಳ್ಳ. ನೀನೇನೂ

ಚಿಂತೆಮಾಡಬೇಡ. ಅವನನ್ನು ನಾನು ಮುಗಿಸಿಬಿಟ್ಟೆ ನೀನು ಹೋಗಿ ಆರಾಮವಾಗಿ ನಿದ್ದೆ ಮಾಡು".

ಚಿತ್ರ ೩.

ಅವಂತಿಯು ಗಿರಾಕಿಯೊಂದಿಗೆ "ಒಂದು ಉಪದೇಶವನ್ನು ನನ್ನಿಂದಲೂ ಕೇಳಿ. ಯಾರಾದರೂ ನಿಮ್ಮ ಹತ್ತಿರ ನಿಮ್ಮ ಪಾತ್ರೆಗಳು ಚೂರುಚೂರಾಗಿಲ್ಲ ಎಂದರೆ ಎಂದೆಂದಿಗೂ ನಂಬಬೇಡಿ" ಎಂದು ಹೇಳುತ್ತಿದ್ದಾನೆ.

ಚಿತ್ರ ೪.

ಕಪ್ಪೆಗೆ ಹಾವು ಸತ್ತಿರುವ ವಿಷಯ ಗೊತ್ತಿಲ್ಲ. ಹಾವು, ಕಲ್ಲು ತರುತ್ತಿರುವ ಬಂಡಿಯ ಗಾಲಿಯನ್ನು ಚೂರುಚೂರು ಮಾಡಲು ಹೋಗಿದೆ ಎಂದು ಕಪ್ಪೆ ಭಾವಿಸಿದೆ. ಆದ್ದರಿಂದ, ಹಾವಿನ ಮಾತಿನಂತೆ ಅದು ಡೋಲು ಹೊಡೆಯುತ್ತಾ, ವಟಗುಟ್ಟುತ್ತಾ ಕುಳಿತಿದೆ.

ಚಿತ್ರ ೫.

ಎರಡೂ ಕೋತಿಗಳು ಮಾವಿನ ಮರದ ಕೊಂಬೆಯ ಮೇಲೆ ಕುಳಿತಿವೆ. ಒಂದು ಕೋತಿ ಹಿಂದಕ್ಕೆ ತಿರುಗಿ ತನ್ನ ಬೆನ್ನನ್ನು ಕೆರೆದುಕೊಳ್ಳುತ್ತಿದೆ. ಮತ್ತು ಇನ್ನೊಂದು ಕೋತಿ ಮಾವಿನ ಹಣ್ಣನ್ನು ಕೀಳುತ್ತಿದೆ.

ಚಿತ್ರ ೬.

ಸಿಂಹಿಣಿ ಹೇಳುತ್ತಿದೆ, "ನಾನು ಒಂದು ಮರಿಗೆ ಜನ್ಮ ಕೊಡುತ್ತೇನೆ. ಆದರೆ ಆ ಮರಿ, ಸಿಂಹವಾಗಿ ಬೆಳೆಯುತ್ತದೆ."

ಚಿತ್ರ ೭.

ಸಿಂಹ ಕೋಪಗೊಂಡಿದೆ. ನರಿಗೆ ತನ್ನ ಚಾಲಾಕಿತನ ಗೊತ್ತಾಗಿ ಹೋಯಿತಲ್ಲಾ ಎಂದು ಮತ್ತು ತನ್ನ ಮೊಸಕ್ಕೆ ಗುರಿಯಾಗಲಿಲ್ಲವಲ್ಲಾ ಎಂಬ ಕಾರಣದಿಂದ ಸಿಟ್ಟು ಬಂದಿದೆ.

ಚಿತ್ರ ೮.

ಇಬ್ಬರು ಮನುಷ್ಯರೂ, ಹಕ್ಕಿ ಮತ್ತು ಹೂವನ್ನು ನೋಡಿ ಓಡಿ ಹೋಗುತ್ತಿದ್ದಾರೆ. ಇದಕ್ಕೆ ಕಾರಣವೇನೆಂದರೆ ಹಕ್ಕಿ ಮತ್ತು ಹೂ ಎರಡೂ ಹಗಲೂ ರಾತ್ರಿ ತಮ್ಮ ಸೌಂದರ್ಯದ ಬಗ್ಗೆ ಹೇಳಿದ್ದನ್ನೇ ಹೇಳುತ್ತಿದ್ದವು. ಅದನ್ನು ಕೇಳಿ ಕೇಳಿ ಜನಕ್ಕೆ ಬೇಸರ ಬಂದಿತ್ತು. ಆದ್ದರಿಂದ ಅವುಗಳನ್ನು ನೋಡಿದ ತಕ್ಷಣ, ಅಲ್ಲಿಂದ ಓಡಿಹೋಗುತ್ತಿದ್ದರು.



ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು